سُورَةُ اللَّهَبِ مَكِّيَّةٌ

ಸೂ. 5 | ರು. 1

# 111. ಅಲ್ಲಹಬ್

**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಅಬೂಲಹಬನ[1] ಕೈಗಳು ಮುರಿದು ಹೋದುವು ಮತ್ತು ಅವನು ನಾಶವಾದನು.[2]

تَبَّتۡ يَدَاۤ اَبِىۡ لَهَبٍ وَّتَبَّ ۝١

2. ಅವನ ಸಂಪತ್ತಾಗಲಿ ಅವನ ಸಂಪಾದನೆಯಾಗಲಿ ಅವನ ಯಾವ ಕೆಲಸಕ್ಕೂ ಬರಲಿಲ್ಲ.

مَاۤ اَغۡنٰى عَنۡهُ مَالُهٗ وَمَا كَسَبَ ۝٢

3. ಖಂಡಿತವಾಗಿಯೂ ಅವನು ಧಗಧಗಿಸುವ ಅಗ್ನಿಯಲ್ಲಿ ಹಾಕಲ್ಪಡುವನು.

سَيَصۡلٰى نَارًا ذَاتَ لَهَبٍ ۝٣

4. ಮತ್ತು (ಅವನ ಜೊತೆ) ಕುಪ್ರಚಾರಕಳಾದ ಅವನ ಪತ್ನಿ ಕೂಡಾ.[3]

وَّامۡرَاَتُهٗ ؕ حَمَّالَةَ الۡحَطَبِ ۝٤

5. ಅವಳ ಕೊರಳಲ್ಲಿ ದರ್ಬೆ ಹುಲ್ಲಿನ ಹಗ್ಗವಿರುವುದು.

فِىۡ جِيۡدِهَا حَبۡلٌ مِّنۡ مَّسَدٍ ۝٥

---

1. ಪ್ರವಾದಿವರ್ಯರ(ಸ) ಚಿಕ್ಕಪ್ಪನಾಗಿದ್ದ ಅವನು ಅಬೂಲಹಬ್ ಎಂಬ ಹೆಸರಿನಿಂದಲೇ ಖ್ಯಾತನಾಗಿದ್ದನು.
2. ಅರ್ಥಾತ್- ಇಸ್ಲಾಮಿನ ಮಾರ್ಗವನ್ನು ತಡೆಯಲಿಕ್ಕಾಗಿ ಅವನು ತನ್ನೆಲ್ಲಾ ಶಕ್ತಿಯನ್ನು ವ್ಯಯಿಸಿ ವಿಫಲನಾದನು. ಈ ಸೂಕ್ತದಲ್ಲಿ ಅನಂತರ ಸಂಭವಿಸಲಿಕ್ಕಿರುವ ವಿಷಯದ ಬಗ್ಗೆ ಭವಿಷ್ಯ ನುಡಿಯಲಾಗಿದೆಯಾದರೂ, ಆ ಘಟನೆ ಸಂಭವಿಸಿಯೇ ಬಿಟ್ಟಿತೇನೋ ಎಂಬಂತೆ ವಿವರಿಸಲಾಗಿದೆ.
3. ಆ ಮಹಿಳೆಯ ಹೆಸರು ಉಮ್ಮು ಜಮೀಲ್ ಎಂದಾಗಿತ್ತು. ಆಕೆ ಅಬೂ ಸುಫ್ಯಾನ್‌ನ ಸಹೋದರಿಯಾಗಿದ್ದಳು ಮತ್ತು ಇಸ್ಲಾಮಿನ ವಿರುದ್ಧದ ವೈರತ್ವದಲ್ಲಿ ಆಕೆ ಯಾವ ರೀತಿಯಲ್ಲೂ ತನ್ನ ಪತಿಗಿಂತ ಹಿಂದಿರಲಿಲ್ಲ.